## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1272

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 24.12.2021

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆಯಡಿಯಲ್ಲಿ ರಾಜ್ಯದ ಎಷ್ಟು ಜಲಾನಯನ ಅಭಿವೃದ್ಧಿ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ; | ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಭೂ ಸಂಪನ್ಮೂಲ ಇಲಾಖೆಯು ಕರ್ನಾಟಕ ರಾಜ್ಯಕ್ಕೆ ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ (PMKSY-WDC) ಕಾರ್ಯಕ್ರಮದಡಿ 2009-10 ನೇ ಸಾಲಿನಿಂದ 2013-14 ನೇ ಸಾಲಿನವರೆಗೆ ಬ್ಯಾಚ್-I ರಿಂದ VI ರವರೆಗೆ 25.65 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ 571 ಜಲಾನಯನ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ. ಈ ಯೋಜನೆಯು ರಾಜ್ಯದಲ್ಲಿ ಮಾರ್ಚ್-2022 ರ ಅಂತ್ಯಕ್ಕೆ ಮುಕ್ತಾಯಗೊಳ್ಳಲಿದೆ. |
| ಆ) | ಈ ಪೈಕಿ ಪೂರ್ಣಗೊಂಡಿರುವ ಯೋಜನೆಗಳಾವುವು; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು) | ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ (PMKSY-WDC) ಯೋಜನೆಯಡಿ ಬ್ಯಾಚ್-I ರಿಂದ ಬ್ಯಾಚ್-VI ರಡಿ ಮಂಜೂರಾದ ಒಟ್ಟು 571 ಯೋಜನೆಗಳಲ್ಲಿ, 142 ಯೋಜನೆಗಳನ್ನು (ಬ್ಯಾಚ್-IV-1, V-63 & VI-78) ದಿನಾಂಕ:01.8.2018 ರಿಂದ ಅನ್ವಯವಾಗುವಂತೆ ಕೇಂದ್ರದ ಪಾಲಿನ ಅನುದಾನವನ್ನು ಸ್ಥಗಿತಗೊಳಿಸಿ, ರಾಜ್ಯದ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಮುಂದುವರೆಸಲಾಗಿದೆ.<br>ಉಳಿದ 429 ಯೋಜನೆಗಳಲ್ಲಿ ರಾಜ್ಯವು ಈಗಾಗಲೇ 374 ಯೋಜನೆಗಳನ್ನು ಪೂರ್ಣಗೊಳಿಸಿ, ಅಂತಿಮ ಮತ್ತು ಮೌಲ್ಯಮಾಪನ ವರದಿಗಳನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆ. 55 ಯೋಜನೆಗಳು ಪ್ರಸ್ತುತ ಮುಕ್ತಾಯದ ಹಂತದಲ್ಲಿದ್ದು, ಅಂತಿಮ ಮತ್ತು ಮೌಲ್ಯ ಮಾಪನ ವರದಿಗಳ ತಯಾರಿಕೆಯ ಕಾರ್ಯವು ಪ್ರಗತಿಯಲ್ಲಿದ್ದು,<br>ಜಿಲ್ಲಾವಾರು ವಿವರಗಳನ್ನು **ಅನುಬಂಧ**ದಲ್ಲಿ ನೀಡಿದೆ. |

| | | |
|---|---|---|
| ಆ) | ಯಾವ ಯಾವ ಯೋಜನೆಗಳನ್ನು ಕೈಗೆತ್ತಿಕೊಳ್ಳುವುದು ಬಾಕಿ ಇದೆ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರದ ಪ್ರಯತ್ನಗಳೇನು? | ಸದರಿ ಕಾರ್ಯಕ್ರಮದಡಿ ಪ್ರಸ್ತುತ ಯಾವುದೇ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಬಾಕಿ ಇರುವುದಿಲ್ಲ, ಆದರೆ, ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಭೂಸಂಪನ್ಮೂಲ ಇಲಾಖೆಯ PMKSY-WDC ಯೋಜನೆಯ ಬ್ಯಾಚ್-IV,V& VI ರ 142 ಯೋಜನೆಗಳನ್ನು ದಿನಾಂಕ:01.8.2018 ರಿಂದ ಅನ್ವಯವಾಗುವಂತೆ ಕೇಂದ್ರದ ಪಾಲಿನ ಅನುದಾನವನ್ನು ಸ್ಥಗಿತಗೊಳಿಸಿ, ರಾಜ್ಯದ ಆಯವ್ಯಯದಲ್ಲಿ ಒದಗಿಸಲಾದ ಅನುದಾದಿಂದ ಮುಂದುವರೆಸಲಾದ ಕಾರಣ, ಈ 142 ಯೋಜನೆಗಳಡಿ ಮಂಜೂರಾದ ಕಾಮಗಾರಿಗಳನ್ನು MGNREGA, PMKSY-OI, RKVY ಮತ್ತು ಇತರೆ ಯೋಜನೆಗಳಡಿ ಆಯಾ ಯೋಜನೆಗಳ ಮಾರ್ಗಸೂಚಿ ಅನುಸಾರ ಒಗ್ಗೂಡಿಸಿ ಅನುಷ್ಠಾನ ಮಾಡಲಾಗುತ್ತಿದೆ.<br>ಸದರಿ 142 ಯೋಜನೆಗಳಲ್ಲಿ 8 ಯೋಜನೆಗಳನ್ನು ಸುಜಲ-III ಯೋಜನೆಯಡಿ ಜಲಾನಯನ ಉಪಚಾರಗಳ ಮೂಲಕ ಸಂಪೂರ್ಣವಾಗಿ ಉಪಚರಿಸಿ ಮುಕ್ತಾಯಗೊಳಿಸಲಾಗಿದೆ. |

ಸಂಖ್ಯೆ: ಕೃಇ/161/ಕೃಕೈಉ/2021

(ಬಿ.ಸಿ.ಪಾಟೀಲ್)
ಕೃಷಿ ಸಚಿವರು